KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ನವೆಂಬರ್ ೬, ೨೦೦೮ (ಕಾರ್ತೀಕ ೧೫, ಶಕ ವರ್ಷ ೧೯೩೦) | ಸಂಚಿಕೆ ೪೪ |
|---|---|---|

## ಭಾಗ – ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಿಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು.

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಒಇ 230 ಪೊಸಿಪ 2008, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2008**

ಶ್ರೀ ಬಿ.ವೈ. ಮಾಲಗತ್ತಿ, ಡಿ.ಸಿ.ಪಿ, ಈಶಾನ್ಯ ವಿಭಾಗ, ಬೆಂಗಳೂರು ರವರಿಗೆ ಕಾಲಿಕ ವೇತನ ಹುದ್ದೆಯಲ್ಲಿ ವಾರ್ಷಿಕ ವೇತನ ಮುಂಬಡ್ತಿ ಪಡೆಯಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 53(ಎಫ್) ರನ್ವಯ ಪ್ರಮಾಣೀಕರಿಸಿದೆ ಹಾಗೂ ದಿನಾಂಕ: 07.05.2006 ರಿಂದ 13.06.2006ರ ವರೆಗಿನ 38 ದಿನಗಳ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 8(15)(ಎಫ್) ರನ್ವಯ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೋಲಿಸ್ ಸೇವೆಗಳು)

ಪಿ.ಆರ್. 1322

**ಅಧಿಸೂಚನೆ**

**ಸಂಖ್ಯೆ: ಒಇ 215 ಪೊಸಿಪ 2008, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2008**

ರಾಜ್ಯ ಪೊಲೀಸ್ ಇಲಾಖೆಯ ಈ ಕೆಳಕಂಡ ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೊಲೀಸ್ (ಸಿವಿಲ್) ವೃಂದದ ಅಧಿಕಾರಿಗಳನ್ನು ಅವರ ಹೆಸರುಗಳ ಮುಂದೆ ಸೂಚಿಸಿರುವ ಹುದ್ದೆಗಳಿಗೆ, ಸಾರ್ವಜನಿಕ ಹಿತದೃಷ್ಟಿಯಿಂದ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ, ವರ್ಗಾಯಿಸಿ ಸ್ಥಳ ನಿಯುಕ್ತಿಗೊಳಿಸಲಾಗಿದೆ.

| ಕ್ರ. ಸಂ. | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಹುದ್ದೆ | ವರ್ಗಾವಣೆಯ ನಂತರ ಸ್ಥಳನಿಯುಕ್ತಿ |
|---|---|---|
| 1. | ಶ್ರೀ ಎಲ್. ಜಗದೀಶ್, ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೊಲೀಸ್, (ಸ್ಥಳ ನೇಮಕಾತಿ ನಿರೀಕ್ಷಣೆಯಲ್ಲಿರುವವರು) | ಡಿವೈ.ಎಸ್.ಪಿ, ರಾಜ್ಯ ಗುಪ್ತವಾರ್ತೆ, ತುಮಕೂರು – ಶ್ರೀ ರಂಗಸ್ವಾಮಿ ಇವರ ವರ್ಗಾವಣೆಯಿಂದ ತೆರವಾದ ಹುದ್ದೆ |
| 2. | ಶ್ರೀ ರಂಗಸ್ವಾಮಿ, ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ರಾಜ್ಯ ಗುಪ್ತವಾರ್ತೆ, ತುಮಕೂರು. | ಡಿವೈ.ಎಸ್.ಪಿ, ಸಿ.ಓ.ಡಿ, ಬೆಂಗಳೂರು – ಖಾಲಿ ಹುದ್ದೆ |

ಈ ಅಧಿಸೂಚನೆಯನ್ನು ಮಾನ್ಯ ಮುಖ್ಯಮಂತ್ರಿಯವರು ಸಂಖ್ಯೆ ಪಿಎಸ್‌ಸಿಎಂ/3157/08, ದಿನಾಂಕ: 25/10/2008 ರನ್ವಯ ಅನುಮೋದಿಸಿದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 1323 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೋಲಿಸ್ ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 250 ಎಸ್‌ಐಎಸ್ 2008, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2008**

ಶ್ರೀ ಸುಬೀರ್ ಹರಿ ಸಿಂಗ್, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಪ್ರವಾಸೋದ್ಯಮ ಇಲಾಖೆ, ಬೆಂಗಳೂರು ರವರಿಗೆ ದಿನಾಂಕ: 20.10.2008 ರಿಂದ 25.10.2008 ರವರೆವಿಗೆ (ಉದಿಸೇ) 06 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ. ಹಾಗೂ ರಜೆಯ ಮೊದಲು ದಿನಾಂಕ 19.10.2008 ಮತ್ತು ರಜೆಯ ಕೊನೆಯಲ್ಲಿ ದಿನಾಂಕ 26.10.2008 ಹಾಗೂ 27.10.2008 ರಂದು ಬರುವ ಸಾರ್ವತ್ರಿಕ ರಜೆಗಳನ್ನು ಉಪಯೋಗಿಸಿಕೊಳ್ಳಲು ಸಹ ಅನುಮತಿ ನೀಡಿದೆ.

ಶ್ರೀ ಸುಬೀರ್ ಹರಿ ಸಿಂಗ್, ಐ.ಎ.ಎಸ್., ರವರ ರಜಾ ಅವಧಿಯಲ್ಲಿ ಸರ್ಕಾರದ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಪ್ರವಾಸೋದ್ಯಮ, ಇಲಾಖೆ, ಬೆಂಗಳೂರು, ಇವರನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಪ್ರವಾಸೋದ್ಯಮ ಇಲಾಖೆ, ಬೆಂಗಳೂರು ಈ ಹುದ್ದೆಯ ಅಧಿಕ ಪ್ರಭಾರದಲ್ಲಿಡಲಾಗಿದೆ.

ಶ್ರೀ ಸುಬೀರ್ ಹರಿ ಸಿಂಗ್, ಐ.ಎ.ಎಸ್., ರವರು ರಜೆಯ ಮೇಲೆ ಹೋಗಿರದಿದ್ದರೆ, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಪ್ರವಾಸೋದ್ಯಮ ಇಲಾಖೆ, ಬೆಂಗಳೂರು ಈ ಹುದ್ದೆಯಲ್ಲೇ ಸ್ಥಾನಪನ್ನರಾಗಿರುತ್ತಿದ್ದರೆಂದು ದೃಢೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಜಿ. ಅನಂತ**

ಪಿ.ಆರ್. 1324 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1)

### ಅಧಿಸೂಚನೆ

**ಸಂಖ್ಯೆ: ಸಿಆಸುಇ 214 ಆಸೇಇ 2008, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2008**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 214 ಆಸೇಇ 2008 ದಿನಾಂಕ: 20.06.2008 ಹಾಗೂ 21.07.2008 ರಲ್ಲಿ 2006ನೇ ತಂಡದ ಕರ್ನಾಟಕ ಆಡಳಿತ ಸೇವಾ ಸಮೂಹ–ಎ (ಕಿರಿಯ ಶ್ರೇಣಿ) ಪರೀಕ್ಷಾರ್ಥ ಅಧಿಕಾರಿಗಳಿಗೆ ತರಬೇತಿ ಪಡೆಯಲು ಕೆಳಕಂಡ ಜಿಲ್ಲೆಗಳಿಗೆ ನಿಯೋಜಿಸಲಾಗಿದೆ.

| ಕ್ರ. ಸಂ. | ಪರೀಕ್ಷಾರ್ಥಿಯ ಹೆಸರು<br>ಶ್ರೀ/ಶ್ರೀಮತಿ | ತರಬೇತಿಗೆ ನಿಯೋಜಿಸಲ್ಪಟ್ಟಿರುವ ಜಿಲ್ಲೆಯ ಹೆಸರು |
|---|---|---|
| 1. | ಎನ್. ಚಂದ್ರಶೇಖರ್ | ಬೆಳಗಾಂ |
| 2. | ಸುರೇಶ್ ಬಿ.ಇಟ್ನಾಳ್ | ಹಾಸನ |
| 3. | ಪ್ರಭು.ಜಿ. | ತುಮಕೂರು |
| 4. | ಅನುರಾಧ ಕೆ.ಎನ್. | ಮಂಡ್ಯ |
| 5. | ನಾಗರಾಜ .ಎನ್.ಎಂ. | ಚಿತ್ರದುರ್ಗ |
| 6. | ಎ.ಬಿ. ಬಸವರಾಜು | ಗುಲ್ಬರ್ಗಾ |
| 7. | ರೂಪ ಐ.ಪಿ. | ಮೈಸೂರು |
| 8. | ಎಂ. ಶಿಲ್ಪ | ದಕ್ಷಿಣ ಕನ್ನಡ |
| 9. | ನವೀನ್‌ಕುಮಾರ್ ರಾಜು .ಎಸ್ | ಉತ್ತರ ಕನ್ನಡ |
| 10. | ಎಂ. ಮಹೇಶ್ | ಮಂಡ್ಯ |

| ಕ್ರ. ಸಂ. | ಪರೀಕ್ಷಾರ್ಥಿಯ ಹೆಸರು<br>ಶ್ರೀ/ಶ್ರೀಮತಿ | ತರಬೇತಿಗೆ ನಿಯೋಜಿಸಲ್ಪಟ್ಟಿರುವ ಜಿಲ್ಲೆಯ ಹೆಸರು |
|---|---|---|
| 11. | ಎಸ್.ಜಿ. ಸೋಮಶೇಖರ್ | ಗದಗ |
| 12. | ಬಿ.ವಿ. ವಸಂತಲಕ್ಷ್ಮಿ | ಬಳ್ಳಾರಿ |
| 13. | ಜಿ. ಲಿಂಗಮೂರ್ತಿ | ಉತ್ತರ ಕನ್ನಡ |
| 14. | ಎಸ್. ರಂಗಪ್ಪ | ಉಡುಪಿ |
| 15. | ಹೆಚ್. ಪ್ರಸನ್ನ | ಹಾವೇರಿ |
| 16. | ಇಬ್ರಾಹಿಂ ಮೈಗೂರು | ರಾಮನಗರ |
| 17. | ಪದ್ಮ ಬಸವಂತಪ್ಪ | ಚಿಕ್ಕಬಳ್ಳಾಪುರ |
| 18. | ಶಶಿಧರ್ ಕುರೇರ | ಚಿಕ್ಕಮಗಳೂರು |
| 19. | ಜಿ. ಸದಾಶಿವ ಪ್ರಭು | ಬಿಜಾಪುರ |
| 20. | ಪ್ರಕಾಶ್ ಜಿ.ಟಿ. ನಿಟ್ಟಾಲಿ | ಚಾಮರಾಜನಗರ |

ಇವರಿಗೆ ದಿನಾಂಕ:31.10.2008 ರವರೆಗೆ ಕ್ಷೇತ್ರ ತರಬೇತಿ ಪಡೆಯಲು ಹಾಗೂ ನಂತರ ದಿನಾಂಕ:3.11.2008 ರಿಂದ 29.11.2008 ರವರೆಗೆ ಭೂಮಾಪನ ಮತ್ತು ಕಂದಾಯ ನಿರ್ಣಯ ತರಬೇತಿ ಸಂಸ್ಥೆ, ಮೈಸೂರು ಇಲ್ಲಿ ತರಬೇತಿ ಪಡೆಯಲು ನಿಯೋಜಿಸಲಾಗಿರುವುದನ್ನು ಮಾರ್ಪಡಿಸಿ ಕೆಳಕಂಡಂತೆ ಆದೇಶಿಸಿದೆ.

1) ಸದರಿ ಪರೀಕ್ಷಾರ್ಥ ಅಧಿಕಾರಿಗಳು ಹಾಲಿ ತರಬೇತಿ ಪಡೆಯುತ್ತಿರುವ ಜಿಲ್ಲೆಯಲ್ಲಿಯೇ ದಿನಾಂಕ:12.12.2008 ರವರೆಗೆ ತರಬೇತಿ ಪಡೆಯಲು ಮುಂದುವರಿಸಿದೆ. ಸಂಬಂದಿಸಿದ ಜಿಲ್ಲಾಧಿಕಾರಿಗಳು ಇವರುಗಳಿಗೆ ಮುಂದುವರಿದ ತರಬೇತಿಯನ್ನು ನೀಡುವಂತೆ ಸೂಚಿಸಿದೆ.

2) ದಿನಾಂಕ:15.12.2008 ರಿಂದ 9.1.2009 ರವರೆಗೆ ಈ ಪರೀಕ್ಷಾರ್ಥ ಅಧಿಕಾರಿಗಳನ್ನು ಭೂಮಾಪನ ಮತ್ತು ಕಂದಾಯ ನಿರ್ಣಯ ತರಬೇತಿ ಸಂಸ್ಥೆ, ಮೈಸೂರು, ಇಲ್ಲಿ ಭೂಮಾಪನ ಮತ್ತು ಭೂದಾಖಲೆಗಳ ತರಬೇತಿ ಪಡೆಯಲು ನಿಯೋಜಿಸಲಾಗಿದೆ. ಈ ಅಧಿಕಾರಿಗಳನ್ನು ತರಬೇತಿಗೆ ಹಾಜರಾಗಲು ಬಿಡುಗಡೆ ಮಾಡುವಂತೆ ಸಂಬಂಧಿಸಿದ ಜಿಲ್ಲಾಧಿಕಾರಿಗಳನ್ನು ಕೋರಲಾಗಿದೆ.

3) ಈ ತರಬೇತಿ ಮುಗಿದ ನಂತರ ಪರೀಕ್ಷಾರ್ಥ ಅಧಿಕಾರಿಗಳು ಹಾಲಿ ತರಬೇತಿ ಪಡೆಯುತ್ತಿರುವ ಜಿಲ್ಲೆಗಳಲ್ಲಿಯೇ ಮುಂದಿನ ತರಬೇತಿಗೆ ಹಾಜರಾಗತಕ್ಕದ್ದು.

ಶ್ರೀ ಸಂಗಪ್ಪ, ಕೆ.ಎ.ಎಸ್. (ಕಿರಿಯ ಶ್ರೇಣಿ), ಪರೀಕ್ಷಾರ್ಥ ಅಧಿಕಾರಿ, ಹಾಲಿ ವಿಶೇಷ ಭೂಸ್ವಾಧೀನಾಧಿಕಾರಿ, ಸಿಂಧನೂರು –ಮೆಹಬೂಬ್ ನಗರ ರೈಲ್ವೆ ಬ್ರಾಡ್‌ಗೇಜ್ ಯೋಜನೆ, ಸಿಂಧನೂರು, ರಾಯಚೂರು ಜಿಲ್ಲೆ, ಇವರನ್ನು ಸಹ ದಿನಾಂಕ:15.12.2008 ರಿಂದ 9.1.2009 ರವರೆಗೆ ಭೂಮಾಪನ ಮತ್ತು ಕಂದಾಯ ನಿರ್ಣಯ ತರಬೇತಿ ಸಂಸ್ಥೆ, ಮೈಸೂರು, ಇಲ್ಲಿ ಭೂಮಾಪನ ಮತ್ತು ಭೂದಾಖಲೆಗಳ ತರಬೇತಿ ಪಡೆಯಲು ನಿಯೋಜಿಸಲಾಗಿದೆ. ರಾಯಚೂರು ಜಿಲ್ಲಾಧಿಕಾರಿಗಳು ಈ ಅಧಿಕಾರಿಯನ್ನು ತರಬೇತಿಗೆ ಹಾಜರಾಗಲು ಬಿಡುಗಡೆ ಮಾಡುವಂತೆ ಕೋರಿದೆ. ತರಬೇತಿ ಮುಗಿದ ನಂತರ ಅಧಿಕಾರಿಯು ಹಾಲಿಯಿರುವ ಹುದ್ದೆಯಲ್ಲಿಯೇ ಮುಂದುವರಿಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1325

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಇಂಧನ ಸಚಿವಾಲಯ**

**ಸೇರ್ಪಡೆ**

**ಸಂಖ್ಯೆ: ಇಎನ್ 38 ಸಮನ್ವಯ 2008, ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2008**

| ಕ್ರ. ಸಂ. | ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ | ಅಧಿಸೂಚನೆಯಲ್ಲಿ ಇರುವ ಕ್ರಮ ಸಂಖ್ಯೆ | ಸೇರ್ಪಡೆ |
|---|---|---|---|
| 1. | ಇಎನ್ 38 ಸಮನ್ವಯ 2008 (2) ದಿನಾಂಕ: 24.09.2008 | 3 | "ಶ್ರೀ ಎಲ್.ರವಿ, ಅಧ್ಯಕ್ಷರು, ಕೆ.ಇ.ಬಿ. ಇಂಜಿನಿಯರ್ಸ್ ಅಸೋಸಿಯೇಷನ್, ಬೆಂಗಳೂರು" ಎಂಬ ಪದಗಳ ನಂತರ **"(ಶ್ರೀ ಎಸ್. ಸತ್ಯಪ್ರೇಮ ಕುಮಾರ್ ಇವರ ಸ್ಥಾನದಲ್ಲಿ)"** ಎಂದು ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು. |
| 2. | ಇಎನ್ 38 ಸಮನ್ವಯ 2008 (3) ದಿನಾಂಕ: 24.09.2008 | 4 | |
| 3. | ಇಎನ್ 38 ಸಮನ್ವಯ 2008 (4) ದಿನಾಂಕ: 24.09.2008 | 5 | |
| 4. | ಇಎನ್ 38 ಸಮನ್ವಯ 2008 (5) ದಿನಾಂಕ: 24.09.2008 | 3 | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜೆ. ಸಂಪತ್ ಕುಮಾರ್**

ಪಿ.ಆರ್. 1326 ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಇಎನ್ 38 ಸಮನ್ವಯ 2008 (2), ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2008**

ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು ಇದರ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 72 (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈಗಾಗಲೇ ಇರುವ ಅಧಿಕಾರಿ ನಿರ್ದೇಶಕರುಗಳ ಜೊತೆಗೆ ಶ್ರೀ ಎ.ಎನ್. ರಮೇಶ್, ವ್ಯವಸ್ಥಾಪಕ ನಿರ್ದೇಶಕರು, ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು ಇವರನ್ನು (ಶ್ರೀ ವಿಜಯನಾರಸಿಂಹ ಇವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ಸದರಿ ಅಧಿಕಾರಿಯವರು ಸೆಸ್ಕ್ ನ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜೆ. ಸಂಪತ್ ಕುಮಾರ್**

ಪಿ.ಆರ್. 1327 ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಇಎನ್ 38 ಸಮನ್ವಯ 2008 (4), ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2008**

ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು ಇದರ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 74 (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈಗಾಗಲೇ ಇರುವ ಅಧಿಕಾರಿ ನಿರ್ದೇಶಕರುಗಳ ಜೊತೆಗೆ ಶ್ರೀ ನಾಗೇಶ್, ನಿರ್ದೇಶಕರು (ತಾಂತ್ರಿಕ), ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು ಇವರನ್ನು (ಶ್ರೀ ಎ.ಎನ್. ರಮೇಶ್ ಇವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ಸದರಿ ಅಧಿಕಾರಿಯವರು ಬೆಸ್ಕಾಂ ನ ನಿರ್ದೇಶಕರು (ತಾಂತ್ರಿಕ) ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜೆ. ಸಂಪತ್ ಕುಮಾರ್**

ಪಿ.ಆರ್. 1328 ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಇಎನ್ 38 ಸಮನ್ವಯ 2008 (6), ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2008**

ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಗುಲ್ಬರ್ಗಾ ಇದರ ಮೆಮೊರ್ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 74 (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈಗಾಗಲೇ ಇರುವ ಅಧಿಕಾರಿ ನಿರ್ದೇಶಕರುಗಳ ಜೊತೆಗೆ ಡಾ:: ಆರ್. ವಿಶಾಲ್ ಭಾ.ಆ.ಸೇ., ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಬಿ&ಆರ್) ಇವರನ್ನು (ಶ್ರೀ ದರ್ಪನ್ ಜೈನ್ ಭಾ.ಆ.ಸೇ., ಇವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ) ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ಸಂಪತ್ ಕುಮಾರ್**

ಪಿ.ಆರ್. 1329 ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಐ52 ಎಸ್‌ಎಲ್‌ವಿ 2008, ಬೆಂಗಳೂರು, ದಿನಾಂಕ: 24ನೇ ಅಕ್ಟೋಬರ್ 2008**

ಸರ್ಕಾರವು ತನ್ನ ಅಧಿಸೂಚನೆ ಸಂಖ್ಯೆ:ಆಇ 226 ರಾಲೆಪ 2008, ದಿನಾಂಕ: 17.10.2008 ರಂತೆ ಶ್ರೀ ಎಂ.ಅಶೋಕ್ ಕುಮಾರ್, ಮುಖ್ಯ ಲೆಕ್ಕಾಧಿಕಾರಿಗಳು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು ಇವರನ್ನು ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು ಇಲ್ಲಿಗೆ ಮುಖ್ಯ ಲೆಕ್ಕಾಧಿಕಾರಿ ಮತ್ತು ಆರ್ಥಿಕ ಸಲಹೆಗಾರರ ಹುದ್ದೆಗೆ ನೇಮಿಸಿ ಇವರ ಸೇವೆಯನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ವಶಕ್ಕೆ ನೀಡಿದೆ.

ಆದುದರಿಂದ, ಶ್ರೀ ಎಂ.ಅಶೋಕ್ ಕುಮಾರ್ ಇವರನ್ನು ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು ಇಲ್ಲಿಗೆ ಮುಖ್ಯ ಲೆಕ್ಕಾಧಿಕಾರಿ ಮತ್ತು ಆರ್ಥಿಕ ಸಲಹೆಗಾರರ ಹುದ್ದೆಗೆ ಮರು ನೇಮಿಸಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಆರ್. ನಾಗಭೂಷಣ**

ಪಿ.ಆರ್. 1330 ಸರ್ಕಾರದ ಅಧೀನ ಕಾರ್ಯದರ್ಶಿ, [ಸಪ್ರಕೈ] [ಪ್ರಭಾರ]

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 251 ಸೆಐಸೆ 2008, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2008**

ಡಾ: ವಿ. ಚಂದ್ರಶೇಖರ್, ಭಾ.ಆ.ಸೇ. ಸರ್ಕಾರದ ಉಪ ಕಾರ್ಯದರ್ಶಿ (ಭೂ ಸುಧಾರಣೆ), ಕಂದಾಯ ಇಲಾಖೆ, ಬೆಂಗಳೂರು ರವರಿಗೆ, ದಿನಾಂಕ:17.10.2008 ರಿಂದ 25.10.2008 ರವರೆಗೆ (ಉದಿಸೇ) 09 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಜಿ. ಅನಂತ**

ಪಿ.ಆರ್. 1331 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 797 ಸಅಸೇ 2008, ಬೆಂಗಳೂರು, ದಿನಾಂಕ: 24ನೇ ಅಕ್ಟೋಬರ್ 2008**

ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿದ ಶ್ರೀ ರಾಮಚಂದ್ರ, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ (ರಾಜಕೀಯ) ಇವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಖಾಲಿ ಇರುವ ಸಹಾಯಕ ಆಯುಕ್ತರು ಅಥವಾ ತತ್ಸಮಾನ ಹುದ್ದೆಗೆ ನೇಮಿಸುವ ಸಲುವಾಗಿ ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1332 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 114 SPS 2008, Bangalore, Dated: 24th October 2008**

On return from training abroad the services of Shri Vipul Kumar, IPS (KN:99), Superintendent of Police are placed at the disposal of Government of India for appointment as Assistant Director, Sardar Vallabhai Patel National Police Academy, Hyderabad on Central Deputation basis.

This Order issues with the approval of Government of India,Ministry of Home Affairs, New Delhi communicated vide fax message No. 1-21015/16/2008-IPS-IV, dated 05.09.2008.

By Order and in the name of the Governor of Karnataka,

**ASHOK P. ATRE**

P.R. 1333

Under Secretary to Government,
Department of Personnel and Administrative Reforms
(Services-IV)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 86 ಸೆಐಸೆ 2008, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2008**

ಶ್ರೀಮತಿ ತಾರಾ ಅಜಯ ಸಿಂಹ, ಭಾ.ಆ.ಸೇ. ಅಧ್ಯಕ್ಷರು, ಕರ್ನಾಟಕ ಭೂಸೇನಾ ನಿಗಮ ನಿಯಮಿತ, ಬೆಂಗಳೂರು ರವರಿಗೆ, ದಿನಾಂಕ: 16.10.2008 ರಿಂದ 22.10.2008 ರವರೆಗೆ (ಉದಿಸೇ) 07 ದಿನಗಳ ಗಳಿಕೆ ರಜೆಯನ್ನು ಘಟನೋತ್ತರವಾಗಿ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಜಿ. ಅನಂತ**

ಪಿ.ಆರ್. 1334

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 246 ಎಸ್‌ಐಎಸ್ 2008, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2008**

ದಿನಾಂಕ: 18.10.2008 ರಿಂದ 22.10.2008 ರವರೆಗೆ "Chicago Illinois" USA ನಲ್ಲಿ ನಡೆದ Water Environment Federation Technical Exhibition and Conference ನಲ್ಲಿ ಭಾಗವಹಿಸಿದ ನಂತರ, ಶ್ರೀ ಕೆ.ಹೆಚ್. ಗೋಪಾಲಕೃಷ್ಣೆ ಗೌಡ, ಐ.ಎ.ಎಸ್. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು ಇವರಿಗೆ ದಿನಾಂಕ 23.10.2008 ರಿಂದ ದಿನಾಂಕ: 25.10.2008 ರವರೆವಿಗೆ (ಉದಿಸೇ) ಒಟ್ಟು 03 ದಿನಗಳ Ex-India ರಜೆಯನ್ನು ಮಂಜೂರು ಮಾಡಿದೆ ಹಾಗೂ ದಿನಾಂಕ 26.10.2008 ಮತ್ತು 27.10.2008 ರಂದು ಬರುವ ಸಾರ್ವತ್ರಿಕ ರಜೆಗಳನ್ನು ಉಪಯೋಗಿಸಿಕೊಳ್ಳಲು ಅನುಮತಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಜಿ. ಅನಂತ**

ಪಿ.ಆರ್. 1335

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1)

**ಸೇರ್ಪಡೆ**

**ಸಂಖ್ಯೆ: ಸಿಆಸುಇ 83 ಎಸ್‌ಎಫ್‌ಪಿ 2008, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2008**

ದಿನಾಂಕ: 7.6.2008ರ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 83 ಎಸ್‌ಎಫ್‌ಪಿ 2008ರಲ್ಲಿ ಕಾಣಿಸಿಕೊಳ್ಳುವ ಪದಗಳು "ರಜಾ ಪ್ರಯಾಣ ರಿಯಾಯಿತಿ ಸೌಲಭ್ಯ"ಕ್ಕೆ ಬದಲಾಗಿ "ಸ್ವಗ್ರಾಮ ಪ್ರಯಾಣ ರಿಯಾಯಿತಿ" (HTC) ಎಂಬ ಪದಗಳನ್ನು ಸೇರ್ಪಡೆ ಮಾಡಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಶೋಕ್ ಪಿ. ಅತ್ರೆ**

ಪಿ.ಆರ್. 1336

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–4)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 141 ಎಸ್‌ಐಎಸ್ 2008, ಬೆಂಗಳೂರು, ದಿನಾಂಕ: 24ನೇ ಅಕ್ಟೋಬರ್ 2008**

ಇದೇ ಸಂಖ್ಯೆಯ ದಿನಾಂಕ: 26.08.2008ರ ಅಧಿಸೂಚನೆಯನ್ನು ಮಾರ್ಪಡಿಸಿ ಶ್ರೀ ಕೆ.ಹೆಚ್. ಅಶ್ವತ್ಥನಾರಾಯಣಗೌಡ, ಐ.ಎ.ಎಸ್., ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸಕ್ಕರೆ ಕಂಪನಿ ನಿಯಮಿತ, ಬೆಂಗಳೂರು ರವರಿಗೆ ದಿನಾಂಕ 27.08.2008 ರಿಂದ 30.09.2008ರವರೆವಿಗೆ (ಉದಿಸೇ) ಒಟ್ಟು 35 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಜಿ. ಅನಂತ**

ಪಿ.ಆರ್. 1337 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 241 ಎಸ್‌ಐಎಸ್ 2008, ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2008**

ಡಾ: ಎಮ್.ಎನ್. ಅಜಯ್ ನಾಗಭೂಷಣ್, ಭಾ.ಆ.ಸೇ. ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ, ಹುಬ್ಬಳ್ಳಿ ರವರಿಗೆ ದಿನಾಂಕ 15.10.2008 ರಿಂದ 23.10.2008 ರವರೆವಿಗೆ (ಉದಿಸೇ) 09 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಜಿ. ಅನಂತ**

ಪಿ.ಆರ್. 1338 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1)

**ಸಮಾಜ ಕಲ್ಯಾಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಕಇ 92 ಪಕಸೇ 2008, ಬೆಂಗಳೂರು, ದಿನಾಂಕ: 24ನೇ ಅಕ್ಟೋಬರ್ 2008**

ಸಮಾಜ ಕಲ್ಯಾಣ ಇಲಾಖೆಯ ಈ ಕೆಳಕಂಡ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32 ರಡಿಯಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಹುದ್ದೆಯಲ್ಲಿ (ವೇತನ ಶ್ರೇಣಿ ರೂ.14050–25050) ಸ್ವತಂತ್ರ ಪ್ರಭಾರದಲ್ಲಿರಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಸ್ಥಳಗಳಿಗೆ ವರ್ಗಾಯಿಸಿ ನೇಮಿಸಲಾಗಿದೆ. ಈ ಅಧಿಕಾರಿಗಳು ಸ್ಥಳ ನಿಯುಕ್ತಿಗೊಂಡ ಹುದ್ದೆಗಳಲ್ಲಿ ಕೂಡಲೇ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

| ಕ್ರ. ಸಂ. | ಹೆಸರು ಮತ್ತು ಕಾರ್ಯನಿರ್ವಹಿಸುತ್ತಿರುವ ಸ್ಥಳ | ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಹುದ್ದೆಯಲ್ಲಿ ಕೆ.ಸಿ.ಎಸ್.ಆರ್. ನಿಯಮ 32 ರಡಿ ಸ್ವತಂತ್ರ ಪ್ರಭಾರದಲ್ಲಿರಿಸಿ ಸ್ಥಳನಿಯುಕ್ತಿಗೊಳಿಸಿರುವ ಸ್ಥಳ |
|---|---|---|
| 1. | ಶ್ರೀ ಕೆ.ಯೋಗೇಶ್ವರಪ್ಪ,<br>ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ,<br>ಕುಮಟ, ಉತ್ತರ ಕನ್ನಡ ಜಿಲ್ಲೆ. | ಜಿಲ್ಲಾ ಪರಿಶಿಷ್ಟ ಪಂಗಡಗಳ ಕಲ್ಯಾಣ ಅಧಿಕಾರಿ,<br>ಚಿತ್ರದುರ್ಗ. |
| 2. | ಶ್ರೀ ಎಸ್.ಎಸ್. ಅಂಗಡಿ,<br>ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ,<br>ನವಲಗುಂದ, ಧಾರವಾಡ ಜಿಲ್ಲೆ. | ಯೋಜನಾ ಸಮನ್ವಯ ಅಧಿಕಾರಿ,<br>ಸಮಗ್ರ ಗಿರಿಜನ ಯೋಜನೆ (ಐಟಿಡಿಸಿ), ಮಂಗಳೂರು,<br>ದಕ್ಷಿಣ ಕನ್ನಡ ಜಿಲ್ಲೆ |
| 3. | ಶ್ರೀ ಆರ್.ಎಲ್. ಕಮ್ಮಾರ್,<br>ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ,<br>ಸವಣೂರು, ಹಾವೇರಿ ಜಿಲ್ಲೆ. | ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಕೊಪ್ಪಳ |
| 4. | ಶ್ರೀ ಎಲ್.ಜಿ. ಗಂಟಿ,<br>ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ,<br>ರಾಣಿಬೆನ್ನೂರು, ಹಾವೇರಿ ಜಿಲ್ಲೆ. | ಯೋಜನಾ ಸಮನ್ವಯ ಅಧಿಕಾರಿ, ಸಮಗ್ರ ಗಿರಿಜನ ಯೋಜನೆ (ಐಟಿಡಿಸಿ), ಮಡಿಕೇರಿ, ಕೊಡಗು ಜಿಲ್ಲೆ. |

| ಕ್ರ. ಸಂ. | ಹೆಸರು ಮತ್ತು ಕಾರ್ಯನಿರ್ವಹಿಸುತ್ತಿರುವ ಸ್ಥಳ | ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಹುದ್ದೆಯಲ್ಲಿ ಕೆ.ಸಿ.ಎಸ್.ಆರ್. ನಿಯಮ 32 ರಡಿ ಸ್ವತಂತ್ರ ಪ್ರಭಾರದಲ್ಲಿರಿಸಿ ಸ್ಥಳನಿಯುಕ್ತಿಗೊಳಿಸಿರುವ ಸ್ಥಳ |
|---|---|---|
| 5. | ಶ್ರೀ ಸಿ. ಪೋಲಯ್ಯ, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ, ಕೂಡ್ಲಗಿ, ಬಳ್ಳಾರಿ ಜಿಲ್ಲೆ. | ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ದಾವಣಗೆರೆ |
| 6. | ಶ್ರೀ ಎಸ್.ಸಿ. ತಿರಲಾಪುರ್, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ, ಹಾವೇರಿ. | ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಧಾರವಾಡ (ಶ್ರೀ ಹುಂಡೇಕರ್ ಇವರ ನಿಲಂಬನೆಯಿಂದ ತೆರವಾಗಿರುವ ಸ್ಥಳಕ್ಕೆ) |
| 7. | ಶ್ರೀ ಎಲ್. ಶ್ರೀನಿವಾಸ, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ, ತೀರ್ಥಹಳ್ಳಿ, ಶಿವಮೊಗ್ಗ ಜಿಲ್ಲೆ. | ಸಹಾಯಕ ನಿರ್ದೇಶಕ, ಪರಿಶಿಷ್ಟ ಪಂಗಡಗಳ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು. |
| 8. | ಶ್ರೀ ಎಂ. ನಾರಾಯಣರೆಡ್ಡಿ, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ, ಬಾಗೇಪಲ್ಲಿ | ಸಹಾಯಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು. |
| 9. | ಶ್ರೀ ಸಿ. ಕಾಂತಯ್ಯ, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ, ತುಮಕೂರು | ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಹಾಸನ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಂ. ಚಿದಾನಂದಸ್ವಾಮಿ**

ಪಿ.ಆರ್. 1339 ಸರ್ಕಾರದ ಅಧೀನ ಕಾರ್ಯದರ್ಶಿ–1,

ಸಮಾಜ ಕಲ್ಯಾಣ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಕಇ 152 ಬಿಸಿಎ 2006, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2008**

ಡಾ:ಚಂದ್ರಮಾ ಎಸ್.ಕಣಗಲಿ, ಇವರನ್ನು ನಿಯೋಜನೆ ಮೇರೆಗೆ ದೇವರಾಜ ಅರಸು ಸಂಶೋಧನಾ ಸಂಸ್ಥೆ, ಬೆಂಗಳೂರು ಇಲ್ಲಿನ ನಿರ್ದೇಶಕರ ಹುದ್ದೆಗೆ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಇ 116 ಬಿಸಿಎ 2001, ದಿನಾಂಕ: 07.06.2002ರಂದು ನಿಯೋಜನೆ ಮಾಡಲಾಗಿದ್ದು, ಇವರ ನಿಯೋಜನಾ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು ನಿಯಮ 50(3)ರನ್ವಯ ದಿನಾಂಕ:31.03.2009ರವರೆಗೆ ಮುಂದುವರೆಸಿ ದಿನಾಂಕ: 31.03.2009ರ ನಂತರ ಮಾತೃ ಇಲಾಖೆಯಲ್ಲಿ ಹಾಜರಾಗಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಬ್ಬಯ್ಯ**

ಪಿ.ಆರ್. 1340 ಸರ್ಕಾರದ ಅಧೀನ ಕಾರ್ಯದರ್ಶಿ–II,

ಸಮಾಜ ಕಲ್ಯಾಣ ಇಲಾಖೆ.

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಲಾ 233 ಎಲ್‌ಎಸಿ 2008, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2008**

ಶ್ರೀ ಎಸ್. ಮರಿಯಪ್ಪ, 2ನೇ ಹೆಚ್ಚುವರಿ ಜಿಲ್ಲಾ ನ್ಯಾಯಾಧೀಶರು, ಕುಟುಂಬ ನ್ಯಾಯಾಲಯ, ಬೆಂಗಳೂರು, ಇವರನ್ನು ಬಿಜಾಪುರದ ಕುಟುಂಬ ನ್ಯಾಯಾಲಯದಲ್ಲಿ ಖಾಲಿ ಇರುವ ಹುದ್ದೆಗೆ ನ್ಯಾಯಾಧೀಶರನ್ನಾಗಿ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಶಿವಾನಂದ**

ಪಿ.ಆರ್. 1341 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.